

# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 1344

ಉತ್ತರಿಸಬೇಕಾದ ದಿನಾಂಕ : 09.03.2022

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಗೋ ಹತ್ಯೆ ನಿಷೇಧ ಕಾಯ್ದೆ ಜಾರಿಗೊಳಿಸಿದ ನಂತರ ಹೆಚ್ಚಳವಾದ ಪಶುಗಳ ಸಂಖ್ಯೆ ಎಷ್ಟು; (ಹೆಣ್ಣು-ಗಂಡು, ಆಕಳು-ಎತ್ತುಗಳ ಜಿಲ್ಲಾವಾರು ವಿವರ ನೀಡುವುದು) | ರಾಜ್ಯದಲ್ಲಿ ಗೋಹತ್ಯೆ ನಿಷೇಧ ಕಾಯ್ದೆ ಫೆಬ್ರವರಿ 2021ರಲ್ಲಿ ಜಾರಿಗೆ ಬಂದಿರುತ್ತದೆ.<br><br>ಜಾನುವಾರು ಗಣತಿಯು 2019ರಲ್ಲಿ ನಡೆದಿದ್ದು, ಗೋಹತ್ಯೆ ನಿಷೇಧ ಕಾಯ್ದೆ ಜಾರಿಗೆ ಬಂದ ನಂತರ ಜಾನುವಾರು ಗಣತಿ ನಡೆದಿರುವುದಿಲ್ಲ.<br><br>ಜಾನುವಾರು ಗಣತಿಯು ಪ್ರತಿ 5 ವರ್ಷಕ್ಕೆ ಒಂದು ಬಾರಿ ಜರುಗುತ್ತದೆ. ಹಾಗಾಗಿ ಪ್ರಸ್ತುತ ಎಷ್ಟು ಪಶುಗಳ ಸಂಖ್ಯೆ ಹೆಚ್ಚಳವಾಗಿದೆ ಎಂಬ ಮಾಹಿತಿಯು ಜಾನುವಾರು ಗಣತಿಯ ನಂತರ ಲಭ್ಯವಾಗುವುದು. |
| ಆ | ರಾಜ್ಯದಲ್ಲಿ ಪ್ರತಿಶತ ಹೈನುಗಾರಿಕೆಯ ಉತ್ಪಾದನೆ ಹೆಚ್ಚಳವಾಗಿದೆ ಅಥವಾ ಎಷ್ಟು ಕಡಿಮೆಯಾಗಿದೆ; (ಜಿಲ್ಲಾವಾರು ವಿವರ ನೀಡುವುದು) | ಮೇಲಿನ ಉತ್ತರ (ಅ) ದಿಂದ ಉದ್ಭವಿಸುವುದಿಲ್ಲ. |
| ಇ | ಕಾಯ್ದೆ ಜಾರಿಯಾದ ನಂತರ ಎಷ್ಟು ಕಸಾಯಿಖಾನೆಗಳು ಕಡಿಮೆಯಾಗಿವೆ; ಎಷ್ಟು ಗೂಳಿಗಳ ಸಂಖ್ಯೆ ಹೆಚ್ಚಾಗಿದೆ; ಇದರಿಂದ ಎಷ್ಟು ರೈತರಿಗೆ ಅನುಕೂಲವಾಗಿದೆ? (ವಿವರ ನೀಡುವುದು) | ಪೌರಾಡಳಿತ ನಿರ್ದೇಶನಾಲಯದಲ್ಲಿ ಲಭ್ಯವಿರುವ ಮಾಹಿತಿಯ ರೀತ್ಯಾ 2017 ರಲ್ಲಿ 31 ಸಂಖ್ಯೆಯ ಕಸಾಯಿಖಾನೆಗಳು ಅಧಿಕೃತವಾಗಿ ಕಾರ್ಯನಿರ್ವಹಿಸುತ್ತಿದ್ದು, 2021 ರ ಅಂತ್ಯಕ್ಕೆ ಕಾರ್ಯನಿರ್ವಹಿಸುತ್ತಿರುವ ಅಧಿಕೃತ ಕಸಾಯಿಖಾನೆಗಳ ಸಂಖ್ಯೆ ಒಟ್ಟು 25 ಎಂದು ವರದಿಯಾಗಿರುತ್ತದೆ.<br><br>ಗೂಳಿಗಳ ಸಂಖ್ಯೆ ಎಷ್ಟು ಹೆಚ್ಚಾಗಿದೆ ಇದರಿಂದ ಎಷ್ಟು ರೈತರಿಗೆ ಅನುಕೂಲವಾಗಿದೆ ಎಂಬ ಮಾಹಿತಿಯು ಜಾನುವಾರು ಗಣತಿಯ ನಂತರ ಲಭ್ಯವಾಗುವುದು. |

ಇ- ಪಸಂಮೀ 62 ಸಲೆವಿ 2022

(ಪ್ರಭು ಬಿ. ಚವ್ಹಾಣ್)
ಪಶುಸಂಗೋಪನೆ ಸಚಿವರು,